# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1271 |
| ಮಾನ್ಯ ಸದಸ್ಯರ ಹೆಸರು | ಶ್ರೀ ಆರ್.ಬಿ.ತಿಮ್ಮಾಪುರ (ವಿಧಾನಸಭಾ ಕ್ಷೇತ್ರದಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 17.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ವಿವಿಧ ಜಾತಿ ಜನಾಂಗದವರಿಗೆ ಮೀಸಲಾತಿ ನೀಡುವ ವಿಚಾರದಲ್ಲಿ ಸರ್ಕಾರದ ನಿಲುವೇನು; | ರಾಜ್ಯ ಸರ್ಕಾರದ ಆದೇಶ ಸಂಖ್ಯೆ: ಸಕಇ 225 ಬಿಸಿಎ 2000 ದಿನಾಂಕ:30.03.2002ರಲ್ಲಿ ರಾಜ್ಯ ಸರ್ಕಾರದ ವ್ಯಾಪ್ತಿಗೆ ಬರುವ ಶೈಕ್ಷಣಿಕ ಮತ್ತು ಉದ್ಯೋಗಕ್ಕಾಗಿ ಹಿಂದುಳಿದ ವರ್ಗಗಳಿಗೆ ಈ ಕೆಳಕಂಡಂತೆ ಮೀಸಲಾತಿಯನ್ನು ನಿಗದಿಪಡಿಸಿರುತ್ತದೆ.<br><br>ಪ್ರವರ್ಗ — ಮೀಸಲಾತಿ ಪ್ರಮಾಣ (ಶೇಕಡವಾರು)<br>ಪ್ರವರ್ಗ-I — 4 %<br>ಪ್ರವರ್ಗ-II (ಎ) — 15 %<br>ಪ್ರವರ್ಗ-II (ಬಿ) — 4 %<br>ಪ್ರವರ್ಗ-III (ಎ) — 4 %<br>ಪ್ರವರ್ಗ-III (ಬಿ) — 5 %<br>ಒಟ್ಟು — 32% |
| ಆ) | ಯಾವ ಯಾವ ಜಾತಿ/ ಸಮುದಾಯಗಳು ಮೀಸಲಾತಿಗಾಗಿ ಸರ್ಕಾರವನ್ನು ಒತ್ತಾಯಿಸಿವೆ; | ಪ್ರಸ್ತುತ ಮೀಸಲಾತಿಗಾಗಿ ಈ ಕೆಳಕಂಡ ಸಮುದಾಯ/ಸಂಘ ಸಂಸ್ಥೆಗಳಿಂದ ಮನವಿಗಳು ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದಲ್ಲಿ ಸ್ವೀಕೃತವಾಗಿರುತ್ತವೆ.<br><br>1) ಪ್ರಥಮ ಜಗದ್ಗುರು ಶ್ರೀ ಬಸವಜಯ ಮೃತ್ಯಂಜಯ ಸ್ವಾಮೀಗಳು ಲಿಂಗಾಯಿತ ಪಂಚಮಸಲಿ ಜಗದ್ಗುರು, ಮಹಾಪೀಠ, ಧರ್ಮಕ್ಷೇತ್ರ ಕೂಡಲಸಂಗಮ, ಹುನಗುಂದ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ರವರು ಲಿಂಗಾಯತ ಪಂಚಮಸಾಲಿ ಸಮಾಜವನ್ನು ಪ್ರವರ್ಗ-2ಎ ಗೆ ಸೇರ್ಪಡೆ ಮಾಡುವಂತೆ ದಿನಾಂಕ: 10.12.2020ರ ಮನವಿಯಲ್ಲಿ ಕೋರಿರುತ್ತಾರೆ.<br><br>2) ಜಗದ್ಗುರು ಶ್ರೀ ಶ್ರೀ ಶ್ರೀ ವಚನಾನಂದ ಮಹಾಸ್ವಾಮಿಗಳು, ವೀರಶೈವ ಲಿಂಗಾಯತ ಪಂಚಮಸಾಲಿ ಜಗದ್ಗುರು ಪೀಠ, ಹರಿಹರ |

| | | |
|---|---|---|
| | | ಇವರು ಲಿಂಗಾಯತ ಪಂಚಮಸಾಲಿ ಸಮಾಜವನ್ನು ಹಿಂದುಳಿದ ವರ್ಗಗಳ ಪಟ್ಟಿಯ ಪ್ರವರ್ಗ-2ಎ ಪಟ್ಟಿಗೆ ಸೇರಿಸುವಂತೆ ಕೋರಿ ದಿನಾಂಕ: 15.03.2021 ರಂದು ಮನವಿ ಸಲ್ಲಿಸಿರುತ್ತಾರೆ.<br><br>3) ಶ್ರೀ ಬಿ.ಎಂ. ಚಿಕ್ಕನಗೌಡರ, ಮುಖ್ಯಸಂಘಟಕರು, ಸಮಸ್ತ ಲಿಂಗಾಯತ ಹೋರಾಟ ವೇದಿಕೆ, ಉಡಕೇರಿ, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ ಇವರು ಮಹಾರಾಷ್ಟ್ರ, ಮಾದರಿಯ ಶೇಕಡ 16 ಮೀಸಲಾತಿಯಂತೆ ಕರ್ನಾಟಕ ಸಮಸ್ತ ಲಿಂಗಾಯತರಿಗೆ ಮೀಸಲಾತಿ ಕಲ್ಪಿಸುವಂತೆ ದಿನಾಂಕ:12.02.2021ರ ಮನವಿಯಲ್ಲಿ ಕೋರಿರುತ್ತಾರೆ.<br><br>4) ಕರ್ನಾಟಕ ಪ್ರದೇಶ ಬಲಿಜ ಸಂಘ, ಬೆಂಗಳೂರು ಇವರು ಬಲಿಜ ಸಮುದಾಯಕ್ಕೆ ಪ್ರವರ್ಗ-2ಎ ರಡಿಯಲ್ಲಿ ಸರ್ಕಾರಿ ಉದ್ಯೋಗ ಅವಕಾಶಗಳ ಮೀಸಲಾತಿಯನ್ನು ನೀಡುವಂತೆ ದಿನಾಂಕ: 04.01.2021ರ ಮನವಿಯಲ್ಲಿ ಕೋರಿರುತ್ತಾರೆ.<br><br>5) ಶ್ರೀ ಕೃಷ್ಣ ಹಳ್ಳಿಕಾರ ಮಹಾಸಂಸ್ಥಾನ ಟ್ರಸ್ಟ್ (ರಿ), ಬೆಟ್ಟನಪಾಳ್ಯ, ಬೆಂಗಳೂರು ರವರು ಹಳ್ಳಿಕಾರ ಜನಾಂಗವನ್ನು ಹಿಂದುಳಿದ ವರ್ಗಗಳ 2ಎ ರಡಿಯಲ್ಲಿ ತಂದು ಒಳಮೀಸಲಾತಿ ಸೌಲಭ್ಯವನ್ನು ಕಲ್ಪಿಸುವಂತೆ ದಿನಾಂಕ: 22.01.2021ರ ಮನವಿಯಲ್ಲಿ ಕೋರಿರುತ್ತಾರೆ.<br><br>6) ಶ್ರೀ ಬಾಲಕೃಷ್ಣ ಎ. ಸಲಹೆಗಾರರು, ಮುಖಾರಿ ಸಮಾಜ ಸಂಘ, ಈಶ್ವರ ಮಂಗಲ, ಪುತ್ತೂರು ತಾಲ್ಲೂಕು, ಇವರು ಮುಖಾರಿ/ಮುವಾರಿ ಸಮುದಾಯವನ್ನು ಜಾತಿ ಮೀಸಲಾತಿ ಪಟ್ಟಿಗೆ ಸೇರಿಸುವಂತೆ ದಿನಾಂಕ:11.02.2020ರಲ್ಲಿ ಕೋರಿರುತ್ತಾರೆ.<br><br>7) ಶ್ರೀ ಎಣ್ಣೆಗೆರೆ ಆರ್. ವೆಂಕಟರಾಮಯ್ಯ, ದೇವಾಂಗ ಸಂಘ, ಬೆಂಗಳೂರು ಇವರು, ದೇವಾಂಗ ಜಾತಿಯನ್ನು ಪ್ರವರ್ಗ-1ಕ್ಕೆ ಸೇರಿಸುವಂತೆ ದಿನಾಂಕ: 19.06.2019ರ ಮನವಿಯಲ್ಲಿ ಕೋರಿರುತ್ತಾರೆ. |

| | | |
|---|---|---|
| | | 8) ಶ್ರೀ ಶರಣಪ್ಪ ಚಟ್ಟೇರ್, ಅಧ್ಯಕ್ಷರು, ಶಿವಸಿಂಪಿ ಸಮಾಜ, ಹೊಸಪೇಟೆ, ಇವರು ಲಿಂಗಾಯತ ಶಿವಸಿಂಪಿ ಪಂಗಡವನ್ನು ಪ್ರವರ್ಗ-2ಎ ಗೆ ಸೇರಿಸುವಂತೆ ದಿನಾಂಕ:18.10.2020ರ ಮನವಿಯಲ್ಲಿ ಕೋರಿರುತ್ತಾರೆ. |
| ಇ) | ವಿವಿಧ ಜನಾಂಗದವರಿಗೆ ಮೀಸಲಾತಿ ಒದಗಿಸುವುದರಿಂದ ಮೀಸಲಾತಿ ಆಶಯಕ್ಕೆ ಧಕ್ಕೆಯಾಗುವುದಿಲ್ಲವೇ? | ಭಾರತದ ಮಾನ್ಯ ಸರ್ವೋಚ್ಛ ನ್ಯಾಯಾಲಯವು ಇಂದಿರಾ ಸಹಾನಿ ಪ್ರಕರಣದ ರಿಟ್ ಅರ್ಜಿ ಸಂಖ್ಯೆ: 438/94 ರ ಮಧ್ಯಂತರ ಆದೇಶದಲ್ಲಿ ಯಾವುದೇ ಸಂದರ್ಭದಲ್ಲಿಯೂ ಮೀಸಲಾತಿಯು ಶೇಕಡ.50ಕ್ಕೆ ಮೀರಬಾರದೆಂದು ಮಧ್ಯಂತರ ಆದೇಶ ನೀಡಿದೆ. ಈ ಆದೇಶದನ್ವಯ ರಾಜ್ಯ ಸರ್ಕಾರದ ಆದೇಶ ಸಂಖ್ಯೆ: ಸಕಇ 225 ಬಿಸಿಎ 2000 ದಿನಾಂಕ:30.03.2002ರಲ್ಲಿ ಹಿಂದುಳಿದ ವರ್ಗಗಳಿಗೆ ಶೈಕ್ಷಣಿಕ ಮತ್ತು ಉದ್ಯೋಗಕ್ಕಾಗಿ ಈ ಕೆಳಕಂಡಂತೆ ಮೀಸಲಾತಿಯನ್ನು ನಿಗದಿಪಡಿಸಿರುತ್ತದೆ. |

| ಪ್ರವರ್ಗ | ಮೀಸಲಾತಿ ಪ್ರಮಾಣ (ಶೇಕಡವಾರು) |
|---|---|
| ಪ್ರವರ್ಗ-I | 4 % |
| ಪ್ರವರ್ಗ-II (ಎ) | 15 % |
| ಪ್ರವರ್ಗ-II (ಬಿ) | 4 % |
| ಪ್ರವರ್ಗ-III (ಎ) | 4 % |
| ಪ್ರವರ್ಗ-III (ಬಿ) | 5 % |
| ಒಟ್ಟು | 32% |

**ಸಂಖ್ಯೆ:**ಹಿಂವಕ 83 ಬಿಸಿಎ 2021

(ಕೋಟಾ ಶ್ರೀನಿವಾಸ ಪೂಜಾರಿ)
ಮುಜರಾಯಿ ಮತ್ತು ಹಿಂದುಳಿದ ವರ್ಗಗಳ
ಕಲ್ಯಾಣ ಸಚಿವರು